# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 21 (24) |
| ಸದಸ್ಯರ ಹೆಸರು | : | ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನ ಸಭಾಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 15-02-2022 |
| ಉತ್ತರಿಸುವ ಸಚಿವರು | : | ನಗರಾಭಿವೃದ್ಧಿ ಸಚಿವರು |

**ಕ್ರ. ಸಂ** | **ಪ್ರಶ್ನೆ** | **ಉತ್ತರ**

**ಅ)**

**ಪ್ರಶ್ನೆ:** ರಾಜ್ಯದ ಪ್ರಮುಖ ನಾಲ್ಕು ಸ್ಮಾರ್ಟ್‌ಸಿಟಿ ಕಾಮಗಾರಿಗಳಾದ ದಾವಣಗೆರೆ, ಮಂಗಳೂರು, ತುಮಕೂರು ಮತ್ತು ಬೆಳಗಾವಿಯ ಕಾಮಗಾರಿಗಳ ವಿವರಗಳೇನು; (ವಿವರ ನೀಡುವುದು)

**ಉತ್ತರ:** ಸ್ಮಾರ್ಟ್ ಸಿಟಿ ಅಭಿಯಾನದಡಿ ಬೆಳಗಾವಿ, ದಾವಣಗೆರೆ, ಮಂಗಳೂರು ಹಾಗೂ ತುಮಕೂರು ನಗರಗಳಲ್ಲಿ ಸ್ಮಾರ್ಟ್ ಸಿಟಿ ಅನುದಾನ ಹಾಗೂ ಪಿಪಿಪಿ ಆಧಾರದಲ್ಲಿ ಅನುಷ್ಠಾನಗೊಳ್ಳುತ್ತಿರುವ ಕಾಮಗಾರಿಗಳ ಪ್ರಸ್ತುತ ಹಂತ ಕೆಳಕಂಡಂತಿದೆ;

ರೂ. ಕೋಟಿ ಗಳಲ್ಲಿ

| ನಗರ | ಒಟ್ಟು ಕಾಮಗಾರಿಗಳು | | ಪೂರ್ಣಗೊಂಡ | | ಪ್ರಗತಿಯಲ್ಲಿರುವ | | ಟೆಂಡರ್ ಹಂತದ | | ವಿಸ್ತೃತ ಯೋಜನಾ ವರದಿ | |
|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಬೆಳಗಾವಿ | 110 | 1008 | 46 | 165 | 60 | 720 | 4 | 123 | 0 | 0 |
| ದಾವಣಗೆರೆ | 95 | 906 | 60 | 242 | 33 | 656 | 2 | 8 | 0 | 0 |
| ಮಂಗಳೂರು | 56 | 1352 | 18 | 61 | 30 | 871 | 7 | 276 | 1 | 144 |
| ತುಮಕೂರು | 158 | 1277 | 117 | 548 | 41 | 729 | 0 | 0 | 0 | 0 |

ನಗರವಾರು ಕಾಮಗಾರಿಗಳ ವಿವರಗಳನ್ನು **ಅನುಬಂಧ** ದಲ್ಲಿ ನೀಡಿದೆ.

**ಆ)**

**ಪ್ರಶ್ನೆ:** ಸದರಿ ನಾಲ್ಕು ಸ್ಮಾರ್ಟ್‌ಸಿಟಿಗಳ ಕಾಮಗಾರಿ ನಿಧಾನಗತಿಯಾಗುತ್ತಿರುವುದಕ್ಕೆ ಕಾರಣಗಳೇನು; ಸ್ಮಾರ್ಟ್‌ಸಿಟಿ ನಿರ್ಮಾಣ ಕಾಮಗಾರಿ ಪೂರ್ಣಗೊಳಿಸಲು ಇದ್ದ ಗಡವು ಎಷ್ಟು;

**ಉತ್ತರ:** ಸ್ಮಾರ್ಟ್ ಸಿಟಿ ಅಭಿಯಾನದಡಿ ಬೆಳಗಾವಿ ಮತ್ತು ದಾವಣಗೆರೆ ನಗರವು ಅಭಿಯಾನದ ಮೊದಲನೆಯ ಸುತ್ತಿನಲ್ಲಿ ಹಾಗೂ ಮಂಗಳೂರು ಮತ್ತು ತುಮಕೂರು ನಗರವು ಅಭಿಯಾನದ ಎರಡನೆಯ ಸುತ್ತಿನಲ್ಲಿ ಆಯ್ಕೆಯಾಗಿರುತ್ತವೆ.

- ಸ್ಮಾರ್ಟ್ ಸಿಟಿ ಅಭಿಯಾನದ ಮಾರ್ಗಸೂಚಿಯಂತೆ ಆಯ್ಕೆಯಾದ ನಗರಗಳಲ್ಲಿ ವಿಶೇಷ ಉದ್ದೇಶಿತ ವಾಹನ ಸ್ಥಾಪನೆಗೆ ಅವುಗಳ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯ ಕಾರ್ಯಾಚರಣೆಗಾಗಿ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಗೆ, ಮಾನವ ಸಂಪನ್ಮೂಲ ನೇಮಕಾತಿಗೆ, ಯೋಜನಾ ಸಮಾಲೋಚಕರನ್ನು ನೇಮಿಸಿ ನೇಮಕಾತಿಗೆ ಹಾಗೂ ತದನಂತರ ಪ್ರಸ್ತಾಪಿತ ಯೋಜನೆಗಳಿಗೆ ಸರ್ವೇ ಕೈಗೊಂಡು ಪರಿಕಲ್ಪನಾ ವರದಿ ಹಾಗೂ ವಿಸ್ತೃತಾ ಯೋಜನಾ ವರದಿಗಳನ್ನು ತಯಾರಿಸಲು ಸ್ವಲ್ಪ ಹೆಚ್ಚಿನ ಕಾಲಾವಧಿ ಆಗಿರುತ್ತದೆ.

- ಯೋಜನೆಯಡಿ ಪ್ರಮುಖವಾಗಿ ಸ್ಮಾರ್ಟ್ ರಸ್ತೆಗಳ ಅಭಿವೃದ್ಧಿ, ಒಳಚರಂಡಿ ಹಾಗೂ ಇನ್ನಿತರೆ ಮೂಲಸೌಕರ್ಯ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದ್ದು, ಸದರಿ ಯೋಜನೆಗಳನ್ನು ನಗರದ ಜನನಿಬಿಡ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಬೇಕಾಗಿದ್ದು, ಸ್ಥಳೀಯವಾಗಿ ಬಹಳ ಸಮಸ್ಯೆಗಳನ್ನು ಎದುರಿಸಬೇಕಾಗಿರುತ್ತದೆ. ಅಲ್ಲದೇ ಈ ಯೋಜನೆಗಳಲ್ಲಿ ಹೆಸ್ಕಾಂ ಬಿಎಸ್‌ಎನ್‌ಎಲ್, ನೀರು ಸರಬರಾಜು ಮಂಡಳಿ ಹಾಗೂ ಇತರೆ ಇಲಾಖೆಗಳ ಯುಟಿಲಿಟಿ ಶಿಫ್ಟಿಂಗ್ ಅವಶ್ಯಕತೆಯಿದ್ದು, ಇದರಿಂದ ಕಾಮಗಾರಿಗಳ ಅನುಷ್ಠಾನದಲ್ಲಿ ಅನಿವಾರ್ಯ ವಿಳಂಬವಾಗುತ್ತಿದೆ.

- ಸ್ಮಾರ್ಟ್ ರಸ್ತೆಗಳ ಅಭಿವೃದ್ಧಿ ಯೋಜನೆಯಲ್ಲಿ ಲೋಕೋಪಯೋಗಿ ಇಲಾಖೆ, ಎಸ್ಕಾಂ, ನೀರು ಸರಬರಾಜು ಮಂಡಳಿ ಹಾಗೂ ಇತರೆ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸಿ ಕೆಲಸ ನಿರ್ವಹಿಸಲು ಹೆಚ್ಚಿನ ಸಮಯ ಅವಶ್ಯವಿರುತ್ತದೆ.

- ಕೋವಿಡ್ -19ರ ಕಾರಣದಿಂದಾಗ್ಯೂ 2020 ರ ಸಾಲಿನಲ್ಲಿ 5 ತಿಂಗಳು

ಹಾಗೂ 2021ರ ಸಾಲಿನಲ್ಲಿ 3 ತಿಂಗಳು ಕಾಮಗಾರಿಗಳ ಅನುಷ್ಠಾನದಲ್ಲಿ ವಿಳಂಬವಾಗಿರುತ್ತದೆ.

- ಇದಲ್ಲದೇ ಯೋಜನಾ ಅನುಷ್ಠಾನವು ನಿಧಾನಗತಿಯಲ್ಲಿ ಸಾಗುತ್ತಿರುವುದಕ್ಕೆ ಆಯಾ ನಗರಗಳಲ್ಲಿ ಕಂಡು ಬಂದ ಪ್ರಮುಖ ಅಂಶಗಳು ಈ ಕೆಳಕಂಡಂತಿವೆ;

  - **ಬೆಳಗಾವಿ:** ಸ್ಮಾರ್ಟ್ ರಸ್ತೆ, ಕೇಂದ್ರ ನಗರ ಬಸ್‌ನಿಲ್ದಾಣ ಹಾಗೂ ಇತರೆ ಯೋಜನೆಗಳನ್ನು ಅನುಷ್ಠಾನಗೊಳಿಸಲು ಕೇಂದ್ರ ರಕ್ಷಣಾ ಇಲಾಖೆಯಿಂದ ನಿರಾಕ್ಷೇಪಣಾ ಪತ್ರದ ಅವಶ್ಯಕತೆವಿದ್ದು, ಅಂತಹ ಒಪ್ಪಿಗೆಗಳನ್ನು ಪಡೆಯುವಲ್ಲಿಯೂ ಸಹ ವಿಳಂಬವಾಗಿರುತ್ತದೆ. ಬಹುಉಪಯೋಗಿ ವಾಣಿಜ್ಯ ಕೇಂದ್ರ ಅಭಿವೃದ್ಧಿ ಟಿಳಕವಾಡಿ, ಯೋಜನೆಯಲ್ಲಿ ನ್ಯಾಯಾಲಯದ ವ್ಯಾಜ್ಯ ಇರುವುದರಿಂದ ಕೂಡಾ ಯೋಜನಾ ಅನುಷ್ಠಾನದಲ್ಲಿ ವಿಳಂಬವಾಗಿರುತ್ತದೆ.
  - **ದಾವಣಗೆರೆ:** ವ್ಯಾಪಾರಸ್ಥರಿಗೆ ತೊಂದರೆಯಾಗದಂತೆ ಹಂತ-ಹಂತದಲ್ಲಿ ಕಾಮಗಾರಿಯನ್ನು ಅನುಷ್ಠಾನ ಮಾಡುತ್ತಿರುವುದರಿಂದ ಮಳೆ ನೀರು ಚರಂಡಿ ಕಾಮಗಾರಿಯಲ್ಲಿ ಪರ್ಯಾಯ ವ್ಯವಸ್ಥೆ ಕಲ್ಪಿಸಬೇಕಾಗಿರುವುದರಿಂದ, 24x7 ಕುಡಿಯುವ ನೀರಿನ ಯೋಜನೆಯೊಂದಿಗೆ ಸಮನ್ವಯತೆ ಸಾಧಿಸಿ ಸ್ಮಾರ್ಟ್ ಸಿಟಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಬೇಕಾಗಿರುವುದರಿಂದ ಯೋಜನಾ ಅನುಷ್ಠಾನದಲ್ಲಿ ಸ್ವಲ್ಪ ಮಟ್ಟಿಗೆ ವಿಳಂಬವಾಗಿರುತ್ತದೆ.
  - **ಮಂಗಳೂರು**: ನಗರದ ಮಾಸ್ಟರ ಪ್ಲಾನ್ ವಲಯ ನಿಯಮಾವಳಿ ಪ್ರಕಾರವೇ ರಸ್ತೆಗಳ Right of Way (RoW) ಗೆ ಅಗಲೀಕರಣಗೊಳಿಸಿದ ನಂತರವೇ ಸ್ಮಾರ್ಟ್ ರಸ್ತೆ ಕಾಮಗಾರಿಗಳನ್ನು ಅನುಷ್ಠಾನ ಮಾಡುತ್ತಿರುವುದರಿಂದ, ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದ ತಡೆಯಾಜ್ಞೆಯಿಂದ, 24x7 ಕುಡಿಯುವ ನೀರಿನ ಯೋಜನೆಯೊಂದಿಗೆ ಸಮನ್ವಯತೆ ಸಾಧಿಸಿ ಸ್ಮಾರ್ಟ್ ಸಿಟಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಬೇಕಾಗಿರುವುದರಿಂದ ಯೋಜನಾ ಅನುಷ್ಠಾನದಲ್ಲಿ ಸ್ವಲ್ಪ ಮಟ್ಟಿಗೆ ವಿಳಂಬವಾಗಿರುತ್ತದೆ.
  - **ತುಮಕೂರು**: ಬಹುತೇಕ ಕಾಮಗಾರಿಗಳನ್ನು ವಾಣಿಜ್ಯ ಬೀದಿ, ಕಿರಿದಾದ ಬೀದಿಗಳಲ್ಲಿ ಕೈಗೊಂಡಿದ್ದು, ಯಂತ್ರೋಪಕರಣಗಳು ಕಾಮಗಾರಿಗಳ ಸಾಮಗ್ರಿಗಳ ಚಲನೆಯಲ್ಲಿ ಅಡಚಣೆಯಾಗುತ್ತಿರುತ್ತದೆ. ಕೆಲವು ಕಾಮಗಾರಿಗಳಲ್ಲಿ ಒತ್ತುವರಿ ಇದ್ದು, ಇವುಗಳನ್ನು ತೆರವುಗೊಳಿಸುವುದಕ್ಕೆ ವಿಳಂಬವಾಗಿರುತ್ತದೆ.

**ಸ್ಮಾರ್ಟ್ ಸಿಟಿ ಯೋಜನೆಯ ಅನುಷ್ಠಾನದ ಬಗ್ಗೆ ಸರ್ಕಾರವು ಸತತವಾಗಿ ನಿಗಾವಹಿಸಿದ್ದು, ಅದರಂತೆ ಈ ಕೆಳಗಿನ ಸಮರ್ಪಕ ಕ್ರಮಗಳನ್ನು ಕೈಗೊಳ್ಳಲಾಗಿದೆ.**

ಅಭಿಯಾನದ ಮಾರ್ಗಸೂಚಿ ಅನುಸಾರ ಬೆಳಗಾವಿ, ದಾವಣಗೆರೆ, ಮಂಗಳೂರು ಹಾಗೂ ತುಮಕೂರು ನಗರಗಳಲ್ಲಿ ಯೋಜನಾ ಅನುಷ್ಠಾನಕ್ಕಾಗಿ ವಿಶೇಷ ಉದ್ದೇಶಿತ ವಾಹನವನ್ನು (Special Purpose Vehicle-SPV) ಕಂಪನಿ ಕಾಯ್ದೆ 2013ರಡಿ ನೋಂದಾಯಿಸಿ ಸ್ಥಾಪಿಸಲಾಗಿದೆ.

| | | |
|---|---|---|
| | | • ಪ್ರಸ್ತಾಪಿತ ಯೋಜನೆಗಳಿಗೆ ವಿಸ್ತೃತಾ ಯೋಜನಾ ವರದಿ ತಯಾರಿಸಿ ಕಾಮಗಾರಿಗಳ ಅನುಷ್ಠಾನದಲ್ಲಿ SPVಗೆ ನೆರವು ನೀಡಲು ಎಲ್ಲಾ ನಗರಗಳಲ್ಲಿ ಯೋಜನಾ ನಿರ್ವಹಣಾ ಸಮಾಲೋಚಕರನ್ನಾಗಿ ನೇಮಿಸಲಾಗಿದೆ.<br><br>• ಯೋಜನೆಯ ಮಾರ್ಗದರ್ಶನಕ್ಕೆ ಮತ್ತು ಮೇಲುಸ್ತುವಾರಿಗಾಗಿ ರಾಜ್ಯ ಮಟ್ಟದಲ್ಲಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ "ರಾಜ್ಯ ಮಟ್ಟದ ಉನ್ನತ ಅಧಿಕಾರಿಯುತ ಸಂಚಾಲನ ಸಮಿತಿಯನ್ನು" ರಚಿಸಲಾಗಿರುತ್ತದೆ. ಈ ಸಮಿತಿಯು ನಿಯಮಿತವಾಗಿ ಸಭೆಗಳನ್ನು ನಡೆಸಿ ಮಾರ್ಗದರ್ಶನ ನೀಡುತ್ತಿರುತ್ತದೆ.<br><br>• ನಗರಗಳು ಸಿದ್ಧಪಡಿಸಿರುವ ಕಾಮಗಾರಿಗಳ ವಿಸ್ತೃತಾ ಯೋಜನಾ ವರದಿಗಳಿಗೆ ತಾಂತ್ರಿಕ ಅನುಮೋದನೆ ನೀಡಲು "ರಾಜ್ಯ ಮಟ್ಟದ ಉಸ್ತುವಾರಿ ಸಂಸ್ಥೆಯಾದ ಕೆಯುಐಡಿಎಫ್‌ಸಿಯಲ್ಲಿ, ಬಾಹ್ಯ ಪರಿಣಿತ ಸದಸ್ಯರನ್ನು ಒಳಗೊಂಡ ತಾಂತ್ರಿಕ ಸಮಿತಿಗಳನ್ನು ರಚಿಸಲಾಗಿದೆ.<br><br>• ಯೋಜನೆಯ ಮಾರ್ಗಸೂಚಿಯನ್ವಯ, ಎಲ್ಲಾ ನಗರಗಳಲ್ಲಿ ಮಾನ್ಯ ಸಂಸತ್ ಸದಸ್ಯರು, ಮಾನ್ಯ ವಿಧಾನ ಸಭಾ ಸದಸ್ಯರು, ಪೂಜ್ಯ ಮಹಾಪೌರರು, ಜಿಲ್ಲಾಧಿಕಾರಿಗಳು, ವ್ಯವಸ್ಥಾಪಕ ನಿರ್ದೇಶಕರು ಸ್ಮಾರ್ಟ್ ಸಿಟಿ ಲಿಮಿಟೆಡ್, ತಾಂತ್ರಿಕ ತಜ್ಞರು, ವಾಣಿಜ್ಯ ಮಂಡಳಿಯ ಸದಸ್ಯರು, ಸ್ವಯಂ ಸೇವಾ ಸಂಸ್ಥೆ ಸದಸ್ಯರು ಹಾಗೂ ಇತ್ತರೆ ಸಮುದಾಯ ಆಧಾರಿತ ಸಂಸ್ಥೆಗಳ ಪ್ರತಿನಿಧಿಗಳು ಒಳಗೊಂಡಿರುವ "ಸ್ಮಾರ್ಟ್ ಸಿಟಿ ಅಡ್ವೈಸರಿ ಫೋರಂ"ನ್ನು ಸ್ಥಾಪಿಸಲಾಗಿದೆ ಹಾಗೂ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ, ಈ ಸಮಿತಿಯು ನಿಯಮಿತವಾಗಿ ಸಭೆಗಳನ್ನು ನಡೆಸಿ ಯೋಜನೆಗಳ ಅನುಷ್ಠಾನ ಹಾಗೂ ಸಮಸ್ಯೆಗಳ ಬಗ್ಗೆ ಮಾರ್ಗದರ್ಶನ ನೀಡುತ್ತಿವೆ.<br><br>• ಮುಂದುವರೆದಂತೆ, ಯೋಜನಾ ಅನುಷ್ಠಾನದಲ್ಲಿ ಚುನಾಯಿತ ಪ್ರತಿನಿಧಿಗಳಿಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಲು ವಿಶೇಷ ಉದ್ದೇಶಿತ ವಾಹನಗಳಿಗೆ ಮಾರ್ಗದರ್ಶನ ಮತ್ತು ಕಾರ್ಯಚಟುವಟಿಕೆಗಳ ಮೇಲುಸ್ತುವಾರಿಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ "ಸ್ಮಾರ್ಟ್ ಸಿಟಿ ಅನುಷ್ಠಾನ ಮತ್ತು ಪರಿಶೀಲನಾ ಸಮಿತಿ" ಯನ್ನು ನಗರ ಮಟ್ಟದಲ್ಲಿ ರಚಿಸಲಾಗಿದೆ. ಈ ಸಮಿತಿಗೆ ಜಿಲ್ಲಾ ಉಸ್ತುವಾರಿ ಸಚಿವರು ಸಹ-ಅಧ್ಯಕ್ಷರಾಗಿದ್ದು, ಮಾನ್ಯ ಲೋಕಸಭಾ ಸದಸ್ಯರುಗಳು, ಮಾನ್ಯ ವಿಧಾನಸಭಾ ಸದಸ್ಯರುಗಳು ಸಮಿತಿಯ ಸದಸ್ಯರಾಗಿದ್ದು, ಕಾಲಕಾಲಕ್ಕೆ ಸಭೆಗಳನ್ನು ನಡೆಸಲಾಗುತ್ತಿದೆ.<br><br>ಸರ್ಕಾರದಿಂದ ಕೈಗೊಂಡಿರುವ ಮೇಲಿನ ಪೂರಕ ಕ್ರಮಗಳ ಮೂಲಕ ಯೋಜನೆಯ ಅನುಷ್ಠಾನಕ್ಕೆ ಎದುರಾಗಿರುವ ಹಲವಾರು ಸವಾಲುಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಂಡು ಈಗ ಕಾಮಗಾರಿಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಹಾಗೂ ನಗರಾಭಿವೃದ್ಧಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ನಿಯಮಿತವಾಗಿ ಪ್ರಗತಿ ಪರಿಶೀಲನಾ ಸಭೆಗಳನ್ನು ನಡೆಸಲಾಗುತ್ತಿದೆ.<br><br>• ಸ್ಮಾರ್ಟ್ ಸಿಟಿ ಯೋಜನೆಯಡಿ ಕೈಗೊಂಡಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕೇಂದ್ರ ನಗರಾಭಿವೃದ್ಧಿ ಸಚಿವಾಲಯವು ಪ್ರಸ್ತುತ ಜೂನ್-2023 ರವರೆಗೆ ಕಾಲಾವಕಾಶ ನೀಡಿದ್ದು, ಸ್ಮಾರ್ಟ್ ಸಿಟಿ ಕಾಮಗಾರಿಗಳ ಸಮರ್ಪಕ ಹಾಗೂ ತ್ವರಿತಗತಿಯ ಅನುಷ್ಠಾನವನ್ನು ಸಾಧಿಸಲು ಎಲ್ಲಾ ಸ್ಮಾರ್ಟ್ ಸಿಟಿಗಳಿಗೆ ತಿಂಗಳವಾರು ಗುರಿಗಳನ್ನು ನಿಗದಿಪಡಿಸಿದ್ದು, ನಿಗದಿತ ಕಾರ್ಯಕ್ರಮದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. |

| | | |
|---|---|---|
| ಇ) | ಸ್ಮಾರ್ಟ್‌ಸಿಟಿ ಕಾಮಗಾರಿಯ ಗುತ್ತಿಗೆದಾರರು ಮತ್ತು ಸರ್ಕಾರದ ಅಧಿಕಾರಿಗಳ ನಡುವಿನ ಸಮನ್ವಯದ ಕೊರತೆಯಿಂದ ಕೆಲಸ ನಿಧಾನವಾಗುತ್ತಿದೆ ಎನ್ನುವ ಆರೋಪ ಕೇಳಿ ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | • ಸ್ಮಾರ್ಟ್ ಸಿಟಿ ಯೋಜನೆಯಡಿ ಪ್ರಮುಖವಾಗಿ ಸ್ಮಾರ್ಟ್ ರಸ್ತೆಗಳ ಅಭಿವೃದ್ಧಿ, ಒಳಚರಂಡಿ, ಉದ್ಯಾನವನಗಳ ಅಭಿವೃದ್ಧಿ, ಕೆರೆ ಹಾಗೂ ನದಿ ಪ್ರದೇಶಗಳ ಅಭಿವೃದ್ಧಿ, Integrated Command & Control Centre, ಮಾರುಕಟ್ಟೆಗಳ ಅಭಿವೃದ್ಧಿ, ಪಾರ್ಕಿಂಗ್ ಪ್ರದೇಶಗಳು, ಪಿಪಿಪಿ ಮಾದರಿಯಲ್ಲಿ ಸೌರಶಕ್ತಿ ಯೋಜನೆ, LED ಬೀದಿ ದೀಪಗಳ ಅಳವಡಿಕೆ ಹಾಗೂ ಇನ್ನಿತರೆ ಮೂಲಸೌಕರ್ಯ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.<br>• ಸ್ಮಾರ್ಟ್ ರಸ್ತೆಗಳನ್ನು ನಗರದ ಜನನಿಬಿಡ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಬೇಕಾಗಿದ್ದು, ಬೆಸ್ಕಾಂ ಬಿಎಸ್‌ಎನ್‌ಎಲ್, ನೀರು ಸರಬರಾಜು ಮಂಡಳಿ ಹಾಗೂ ಇತರೆ ಇಲಾಖೆಗಳ "ಯುಟಿಲಿಟಿ ಶಿಫ್ಟಿಂಗ್" ನಂತರ ಮಾತ್ರ ಕಾಮಗಾರಿ ಪ್ರಾರಂಭಿಸಬೇಕಾಗಿರುವ ಕಾರಣ ರಸ್ತೆ ಕಾಮಗಾರಿಗಳ ಅನುಷ್ಠಾನಕ್ಕೆ ಹೆಚ್ಚಿನ ಸಮಯ ಹಾಗೂ ಹಲವು ಇಲಾಖೆಗಳ ಸಮನ್ವಯದ ಅಗತ್ಯತೆ ಇದ್ದು, ಈ ಬಗ್ಗೆ ಗುತ್ತಿಗೆದಾರರಿಂದ ಮಾಹಿತಿ ಪಡೆದು, ಆದ್ಯತೆ ಮೇಲೆ ಅಡೆತಡೆಗಳನ್ನು ನಿವಾರಿಸುತ್ತಿದ್ದು, ಯಾವುದೇ ಸಮನ್ವಯ ಕೊರತೆ ಕಂಡುಬಂದಿರುವುದಿಲ್ಲ.<br>• ಎಲ್ಲಾ ನಗರಗಳಲ್ಲಿನ ಪ್ರಮುಖ ರಸ್ತೆಗಳನ್ನು ಸ್ಮಾರ್ಟ್ ರಸ್ತೆಗಳ ಅಭಿವೃದ್ಧಿ/ ಪುನರ್ ನಿರ್ಮಾಣ ಕೆಲಸಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ವಾಹನ ಸವಾರರಿಗೆ ಬದಲಿ ರಸ್ತೆ ವ್ಯವಸ್ಥೆ / ಏಕಮುಖ ಸಂಚಾರ ವ್ಯವಸ್ಥೆ ಮಾಡಿ ಹಂತ-ಹಂತವಾಗಿ ರಸ್ತೆ ಕಾರ್ಯಗಳನ್ನು ಪೂರ್ಣಗೊಳಿಸಬೇಕಿರುತ್ತದೆ. ಈ ಬಗ್ಗೆ ಗುತ್ತಿಗೆದಾರರಿಗೆ ಹೆಚ್ಚಿನ ಮಾನವ ಸಂಪನ್ಮೂಲ ಹಾಗೂ ಯಂತ್ರೋಪಕರಣಗಳನ್ನು ಬಳಸಿ ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಸೂಚನೆ ನೀಡಲಾಗುತ್ತಿದೆ ಹಾಗೂ ಉದ್ದೇಶ ಪೂರ್ವಕ ವಿಳಂಬ ಕಂಡುಬಂದಿರುವ ಪ್ರಕರಣಗಳಲ್ಲಿ ದಂಡವನ್ನು ಸಹ ವಿಧಿಸಲಾಗುತ್ತಿದೆ.<br>ಮೇಲೆ ವಿವರಿಸಿರುವಂತೆ ಗುತ್ತಿಗೆದಾರರು ಹಾಗೂ ಅಧಿಕಾರಿಗಳ ನಡುವೆ ಸಮನ್ವಯತೆ ಕೊರತೆ ಕಾರಣದಿಂದ ಕಾಮಗಾರಿ ನಿಧಾನವಾಗಬಹುದಾದ ಅಂಶಗಳನ್ನು ಸತತವಾಗಿ ಪರಿಶೀಲಿಸಿ ಪರಿಹಾರ ಒದಗಿಸಲಾಗುತ್ತಿದ್ದು, ಈ ಕಾರಣದಿಂದ ಹೆಚ್ಚಿನ ವಿಳಂಬವಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>• ಗುತ್ತಿಗೆದಾರರು ನಿಗಧಿತ ಸಮಯದಲ್ಲಿ ಕಾರ್ಯ ಕೈಗೊಳ್ಳಲು ಪೂರಕವಾಗಿ ಸ್ಮಾರ್ಟ್ ಸಿಟಿ ಕಾಮಗಾರಿಗಳ ಅನುಷ್ಠಾನದಲ್ಲಿ ವಿವಿಧ ಇಲಾಖೆಗಳ ನಡುವೆ ಸಮನ್ವಯತೆ ಸಾಧಿಸಲು ಆಯಾಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾಲಕಾಲಕ್ಕೆ ಸಭೆಗಳನ್ನು ನಡೆಸಿ ಸಮಸ್ಯೆಗಳನ್ನು ಬಗೆಹರಿಸಲಾಗುತ್ತಿದೆ. |
| ಈ) | ಸ್ಮಾರ್ಟ್‌ಸಿಟಿ ಸಂಪೂರ್ಣ ಕಾಮಗಾರಿ ಪೂರ್ಣಗೊಳಿಸಲು ಸರ್ಕಾರದ ಮುಂದಿರುವ ಕಾರ್ಯಕ್ರಮಗಳಾವುವು? (ಸಂಪೂರ್ಣ ಮಾಹಿತಿ ನೀಡುವುದು) | ಸ್ಮಾರ್ಟ್ ಸಿಟಿ ಯೋಜನೆಯಡಿ ಕೈಗೊಂಡಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕೇಂದ್ರ ನಗರಾಭಿವೃದ್ಧಿ ಸಚಿವಾಲಯವು ಜೂನ್-2023 ರವರೆಗೆ ಕಾಲಾವಕಾಶ ನೀಡಿದ್ದು, ಅದರಂತೆ ಕಾಮಗಾರಿಗಳನ್ನು ಪೂರ್ಣಗೊಳಿಸಲು ಎಲ್ಲಾ ನಗರಗಳಿಗೆ ತಿಂಗಳವಾರು ಗುರಿಗಳನ್ನು ನಿಗಧಿಪಡಿಸಿದ್ದು, ಅದರಂತೆ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ ಹಾಗೂ ಮಾಸಿಕ ಪ್ರಗತಿ ಪರಿಶೀಲನಾ ಸಭೆಗಳನ್ನು ಕೈಗೊಂಡು ಕಾಮಗಾರಿಗಳ ಸಮಯಬದ್ಧ ಪೂರ್ಣಗೊಳಿಸುವಿಕೆಗೆ ಒತ್ತು ನೀಡಿದೆ. |

ಸಂಖ್ಯೆ:ನಅಇ 31 ಸಿಎಸ್‌ಎಸ್ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು